



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 83

ಸಂಪುಟ: ೧೦ ಸಂಚಿಕೆ: ೦೬ | ಅಕ್ಟೋಬರ್ ೨೦೨೨ | ಪುಟಗಳು ೮ | ವಾರ್ಷಿಕ ಚಂದಾ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 10 Issue: 06 | **October** 2022 | Pages - 8 | A. Sub. - Rs. 20/- | Editor : Sri. B.R. Ravindranath


ಶ್ರೀ ಶಕ ೧೯೪೫ ಶುಭಕೃತ ನಾಮ ಸಂವತ್ಸರ– ದಕ್ಷಿಣಾಯಣ– ಶರತ್ ಋತು ಚಾಂದ್ರಮಾನ –ಆಶ್ವಯುಜ –ಕಾರ್ತಿಕ ಮಾಸ ಸೌರಮಾನ ಕನ್ಯಾ–ತುಲಾ

## ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯ ನಿಧನ

### (೨೧-೦೭- ೧೯೩೭ - ೧೨-೮-೨೦೨೨)



ದಿನಾಂಕ ೩೦-೧೧-೨೦೧೧ ರಿಂದ ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿದ್ದ ನಾಡೋಜ ಡಾ. ಎಂ.ಎಚ್.ಕೃಷ್ಣಯ್ಯನವರು ದಿನಾಂಕ ೧೨.೮.೨೦೨೨ರಂದು ನಿಧನರಾದರು. ಅವರು ಕನ್ನಡದ ಅತ್ಯುತ್ತಮ ಅಧ್ಯಾಪಕರಲ್ಲಿ ಒಬ್ಬರು ಮತ್ತು ಪ್ರಸಿದ್ಧ ವಿದ್ವಾಂಸರಾಗಿದ್ದರು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವೀಧರರಾದ ಕೃಷ್ಣಯ್ಯನವರು ೧೯೫೯ರಿಂದ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪ್ರಾಧ್ಯಾಪಕರಾಗಿ ಬೆಂಗಳೂರು, ಕೋಲಾರ, ಮಂಗಳೂರು, ತುಮಕೂರು, ಮಂಡ್ಯಗಳಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಸೇವೆ ಸಲ್ಲಿಸಿದರು. ಚನ್ನಪಟ್ಟಣದ ಕುವೆಂಪು ಮಹಾವಿದ್ಯಾಲಯ ಹಾಗೂ ಮಾಗಡಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದರು. ಯುವಜನ ಸೇವಾ ಮತ್ತು ಕ್ರೀಡಾ ನಿರ್ದೇಶನಾಲಯದ 'ಯುವ ಕರ್ನಾಟಕ' , 'ಸ್ಪೋರ್ಟ್ಸ್ ಅರೆನಾ' ಹಾಗೂ ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಕಲಾ ಪಂಥ ಮಾಲೆಯಲ್ಲಿ 'ಎಕ್ಸ್ಪ್ರೆಷನಿಸಂ' ಮತ್ತು 'ಇಂಪ್ರೆಷನಿಸಂ' ಎನ್ನುವ ಎರಡು ಕೃತಿಗಳನ್ನು ಹೊರತಂದರು. ಉದಯಭಾನು ಕಲಾಸಂಘಕ್ಕೆ ಮಹತ್ವದ ಕೃತಿಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಸಂಘವು ತನ್ನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಹೊರತಂದ ಸುಮಾರು ೩೦೦೦ ಪುಟಗಳ 'ಬೆಂಗಳೂರು ದರ್ಶನ' ಬೃಹತ್ ಸಂಪುಟಗಳ ಸಂಪಾದಕರಾಗಿಯೂ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಕಾರ್ಯಕಾರಿ ಸಮಿತಿ(ಸಿಂಡಿಕೇಟ್), ಕನ್ನಡ ಪುಸ್ತಕ ಪ್ರಾಧಿಕಾರ, ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರ ಇವುಗಳ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ನಾಡೋಜ ಗೌರವ ಡಾಕ್ಟರೇಟ್, ಕುವೆಂಪು ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

ಕೃಷ್ಣಯ್ಯನವರು ಕನ್ನಡ ಪ್ರಾಧ್ಯಾಪಕರಾಗಿ, ಸಾಹಿತಿ ವಿಮರ್ಶಕರಾಗಿ ಅದಕ್ಕೆ ಪೂರಕ ಎನಿಸುವಂತೆ ಸಂಗೀತ ಮತ್ತು ಕಲಾ ಪ್ರಪಂಚದೊಂದಿಗೆ ಇರಿಸಿಕೊಂಡ ಗಾಢ ಸಂಬಂಧ ವಿಶೇಷವಾಗಿ ಕಾಣುತ್ತದೆ. ಇದ–ರಿಂದ ಅವರ ಬರವಣಿಗೆಯಲ್ಲಿ ಒಂದರ ಪ್ರಭಾವ ಮತ್ತೊಂದರ ಮೇಲೆ ಆಗುವುದಕ್ಕೆ, ಒಂದರಿಂದ ಮತ್ತೊಂದು ಏನನ್ನೋ ಪಡೆಯುವುದಕ್ಕೆ ಸಾಧ್ಯವಾಯಿತು; ಮೂರೂ ಕ್ಷೇತ್ರಗಳಲ್ಲಿನ ಸೌಂದರ್ಯ ಪ್ರಜ್ಞೆ ಅಪೂರ್ವ ಎನಿಸುವಂತೆ ಅಭಿವ್ಯಕ್ತಿಗೊಂಡಿತು. ಅದರಿಂದಾಗಿಯೇ ಭಾಷಾಚರಿತ್ರೆ, ಕಲಾವಿಮರ್ಶೆ, ಸಾಹಿತ್ಯ ವಿಮರ್ಶೆ, ಜೀವನ ಚರಿತ್ರೆ, ಶಿಲ್ಪಕಲೆ, ರಂಗಭೂಮಿ ಕುರಿತ ಕೃತಿಗಳಲ್ಲೂ ರಸಮಯತೆ ಕಾಣಿಸಿಕೊಂಡಿತು. 'ಕಲಾದರ್ಶನ' ದಂಥ ಕೃತಿ ಆ ಕ್ಷೇತ್ರಕ್ಕೆ ಮಹತ್ವದ ಕೊಡುಗೆ ಎನಿಸಿತು. ಅವರು ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ಅವರೊಂದಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಸಂಪಾದಿಸಿಕೊಟ್ಟ 'ಸಾಲು ದೀಪಗಳು' ಕನ್ನಡ ಸಾಹಿತ್ಯದ ಸಾಧಕರ ಸಮಗ್ರ ಮಾಹಿತಿಯನ್ನು ಸಂಗ್ರಹವಾಗಿ –ಸ್ವಾರಸ್ಯಪೂರ್ಣವಾಗಿ ಕಟ್ಟಿಕೊಡುವ ಬೃಹತ್ ಸಂಪುಟ. ಉದಯಭಾನು ಕಲಾ ಸಂಘಕ್ಕೆ ಪ್ರೊ. ಎಲ್.ಎಸ್.ಶೇಷಗಿರಿರಾವ್, ಡಾ.ವಿಜಯಾ ಅವರೊಂದಿಗೆ ಸಿದ್ಧಪಡಿಸಿಕೊಟ್ಟ 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ' ಸಂಶೋಧಕರಿಗೆ ಮಾರ್ಗದರ್ಶಿಯಾಗುವ ಹಲವಾರು ಮಹತ್ವದ ಸಂಗತಿಗಳನ್ನೊಳಗೊಂಡ ವಿಶಿಷ್ಟ ಕೃತಿ. ಹಾಗೆಯೇ, ಕುವೆಂಪು ಸಾಹಿತ್ಯ–ಚಿತ್ರಸಂಪುಟ, ಸಾಹಿತ್ಯ ಮತ್ತು ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ, ಬೆಂಗಳೂರು ಕೆಂಪೇಗೌಡನ ವಶಂಸ್ಥರು, ಕಾಲು ಶತಮಾನ ಕಂಡ ಕನ್ನಡ ಪತ್ರಿಕೆಗಳು – ೨ನೇ ಪುಟಕ್ಕೆ



ಚಂದಾ ವಿವರಗಳು
ವಾರ್ಷಿಕ ಚಂದಾ : ರೂ. ೨೦/-
ಐದು ವರ್ಷಗಳ ಚಂದಾ : ರೂ. ೧೦೦/-


ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ಮೊಬೈಲ್ : ೯೭೨೮೧೨೧೨೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10-30ರಿಂದ ಸಂಜೆ 5-30ಗಂಟೆ.
ವಾರದ ರಜಾದಿನ : ಮಂಗಳವಾರ

ಸಂಪಾದಕೀಯ

ನಾಡೋಜ ಎಂಹೆಚ್ ಕೃಷ್ಣಯ್ಯ ಅವರ ನಿಧನದಿಂದ ಬಿಎಂಶ್ರೀ ಪ್ರತಿಷ್ಠಾನಕ್ಕೆ ಅಪಾರ ನಷ್ಟ ಉಂಟಾಗಿದೆ. ನಮಗೆಲ್ಲರಿಗೂ ಅವರ ಸ್ನೇಹ ಹಾಗೂ ಮಾರ್ಗದರ್ಶನಗಳ ನೆನಪು ಸದಾಕಾಲ ನೆನಪಿನಲ್ಲಿರುತ್ತವೆ.

ನಾವೀಗ ಹೊಸ ಗೌರವ ಅಧ್ಯಕ್ಷರ ಆಗಮನವನ್ನು ನಿರೀಕ್ಷಿಸುತ್ತಿದ್ದೇವೆ.

ಕರ್ನಾಟಕ ಸರ್ಕಾರ ನೀಡುತ್ತಿದ್ದ ಅನುದಾನದ ಬಗ್ಗೆ ಈಗ ಗೊಂದಲಗಳು ಉಂಟಾಗಿವೆ. ಅನುದಾನದ ಮೊತ್ತ ಕಡಿತಗೊಂಡಿರುವುದಲ್ಲದೆ ಬಿಎಂಶ್ರೀ ಪ್ರತಿಷ್ಠಾನದಂತಹ ಸಂಸ್ಥೆಗಳಿಗೂ ಅನುದಾನ ದೊರೆಯುತ್ತದೆಯೋ ಇಲ್ಲವೋ ಎಂಬ ಅನಿಶ್ಚತೆಗಳು ಎದುರಾಗತೊಡಗಿವೆ. ಹೀಗಾಗಿ ಬಿಎಂಶ್ರೀ ಪ್ರತಿಷ್ಠಾನದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವತ್ತ ನಾವೆಲ್ಲರೂ ಚಿಂತನೆ ಮಾಡಬೇಕಾಗಿರುತ್ತದೆ.

– ಬಿ.ಆರ್. ರವೀಂದ್ರನಾಥ್

೨೭.೦೮.೨೦೨೨

## ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯನವರಿಗೆ ಶ್ರದ್ಧಾಂಜಲಿ



ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಉದಯಭಾನು ಕಲಾ ಸಂಘದ ಸಹಯೋಗದಲ್ಲಿ ಈ ಎರಡೂ ಸಂಸ್ಥೆಗಳೊಂದಿಗೆ ಜತೆಯಲ್ಲಿ ನಿಕಟವಾದ ಸಂಪರ್ಕವನ್ನು ಇರಿಸಿಕೊಂಡು ಸಂಸ್ಥೆಗಳ ಬೆಳವಣಿಗೆಗೆ ಪೂರಕ ಶಕ್ತಿಯಾಗಿ ನಿಂತು ಯುವ ಪೀಳಿಗೆಗೆ ಆದರ್ಶಪ್ರಾಯವಾಗಿದ್ದ ನಾಡೋಜ ಪ್ರೊ. ಎಂ.ಎಚ್.ಕೃಷ್ಣಯ್ಯನವರ ಶ್ರದ್ಧಾಂಜಲಿ ಸಭೆ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ 'ನುಡಿನಮನ' ಎಂಬ ಹೆಸರಿನಲ್ಲಿ ಆಯೋಜಿಸಲಾಗಿದ್ದ ಕಾರ್ಯಕ್ರಮದಲ್ಲಿ ಎಂ.ಎಚ್.ಕೆ. ಅವರ ಕುಟುಂಬ ವರ್ಗ, ಬಂಧುಮಿತ್ರರು ಮತ್ತು ಕಲೆ ಸಾಹಿತ್ಯ, ಸಂಗೀತ ಮತ್ತು ಸಂಘಟನಾ ಕ್ಷೇತ್ರದ ಮುಖಂಡರುಗಳು ಪಾಲ್ಗೊಂಡು ನಮನ ಸಲ್ಲಿಸಿದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಶಾಂತರಾಜು ಅವರ ನಿರ್ವಹಣೆಯಲ್ಲಿ ಮೂಡಿಬಂದ ಕಾರ್ಯಕ್ರಮದಲ್ಲಿ ಉದಯಭಾನು ಕಲಾ ಸಂಘದ ಸಂಸ್ಥಾಪಕ ಕಾರ್ಯದರ್ಶಿಗಳಾದ ಎಂ. ನರಸಿಂಹ ಅವರು ತಮ್ಮ ಸಂಸ್ಥೆ ಮತ್ತು ಎಂ.ಎಚ್.ಕೆ. ಸಂಬಂಧವನ್ನು ಕುರಿತು ಮಾತನಾಡಿ ಚಾಲನೆ ನೀಡಿದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾದ ಬೈರಮಂಗಲ ರಾಮೇಗೌಡ ಅವರು ಪ್ರತಿಷ್ಠಾನವನ್ನು ಎಂ.ಎಚ್.ಕೆ. ಗೌರವ ಅಧ್ಯಕ್ಷರಾಗಿ ನಡೆಸಿಕೊಂಡು ಬಂದಿರುವ ರೀತಿ, ಅವರ ಕೊನೆಯ ದಿನಗಳು ಮತ್ತು ಅವರಿಲ್ಲದೆ ಉಂಟಾಗಿರುವ ಸಾಂಸ್ಕೃತಿಕ ನಷ್ಟವನ್ನು ಉಲ್ಲೇಖಿಸಿ ಮಾತನಾಡಿದರು. ಮನಮಿಡಿಯುವ ಸಾಕ್ಷ್ಯಚಿತ್ರ ಅವರ ವ್ಯಕ್ತಿತ್ವವನ್ನು ಕಣ್ಮುಂದೆ ನಿಲ್ಲಿಸಿತು. ನಿವೃತ್ತ ನ್ಯಾಯಮೂರ್ತಿಗಳಾದ ಎ.ಜೆ. ಸದಾಶಿವ ಅವರು ಗದ್ಗದಿತರಾಗಿ ಕೃಷ್ಣಯ್ಯನವರ ಜೊತೆಗಿನ ಬಾಂಧವ್ಯವನ್ನು ವಿವರಿಸಿದರು. ನಾಡೋಜ ಹಂಪನಾ ಸಹಾಧ್ಯಾಯಿಗಳಾದ ಅವರ ಸಂಬಂಧವನ್ನು ನೆನಪು ಮಾಡಿಕೊಂಡು ಎಂ.ಎಚ್.ಕೆ. ಅವರ ಸಾಹಿತ್ಯೇತರ ಒಲವುಗಳ ಬಗೆಗೆ ಮಾತನಾಡಿ ತಮ್ಮ ವೈವಾಹಿಕ ಬಂಧನಕ್ಕೆ ಕಾರಣ ಪುರುಷರೂ ಇವರೇ ಎಂದು ಉಲ್ಲೇಖಿಸುವುದನ್ನು ಮರೆಯಲಿಲ್ಲ.ಡಾ. ಜಿ.ರಾಮಕೃಷ್ಣ ಅವರು ಮಾತನಾಡಿ ಅವರ ಹಾಸ್ಯ ಪ್ರಜ್ಞೆ, ಸೇವಾನಿಷ್ಠೆ, ನಡೆ–ನುಡಿಯನ್ನು ಚಿತ್ರಿಸಿದರು.

ಡಾ.ವಿಜಯಾ ಅವರು ಗ್ರಂಥ ಸಂಪಾದನೆಯ ಸಂದರ್ಭದಲ್ಲಿ ಎಂ.ಎಚ್.ಕೆ. ನಿಷ್ಠೆ, ತಲಸ್ಪರ್ಶಿ ಅಧ್ಯಯನ, ಪ್ರಾಮಾಣಿಕತೆ, ಸಾಹಿತ್ಯೇತರ ವಿಷಯದಲ್ಲಿನ ಅವರ ನೈಪುಣ್ಯತೆಯನ್ನು ವಿವರಿಸುತ್ತಲೇ ಗದ್ಗದಿತರಾಗಿ ಅವರ ವ್ಯಕ್ತಿತ್ವ ಆದರ್ಶಪ್ರಾಯವಾದುದು ಎಂದು ಹೇಳಿದರು. ಶ್ರೀ ಮಾವಿನಕೆರೆ ರಂಗನಾಥನ್ ಅವರು ಎಂ.ಎಚ್.ಕೆ. ಅವರು ಗುರುಗಳಾಗಿ, ಹಿತೈಷಿಯಾಗಿ ನನ್ನನ್ನು ಚೆನ್ನಾಗಿ ಬಲ್ಲವರು. ಮಾಸ್ತಿ ಪ್ರತಿಷ್ಠಾನ ಸ್ಥಾಪನೆಯಲ್ಲಿ ಅವರು ನೀಡಿದ ಸಲಹೆ ಸಹಕಾರ ಮರೆಯಲಾಗದು ಎಂದು ಮನದುಂಬಿ ಹೊಗಳಿದರು. ಶ್ರೀ ಕೆ.ಆರ್.ಕಮಲೇಶ್ ಅವರು ರಾಜ್ಯ ಯುವಜನ ಸೇವಾ ಇಲಾಖೆಯಿಂದ ಹೊರಬಂದ 'ಯುವಕರ್ನಾಟಕ' ಸಂಚಿಕೆ ಬಹಳ ಜನಪ್ರಿಯವಾಯಿತು. ಕಲಾಪ್ರೇಮಿಯಾದ ಇವರು ಕಲಾವಿದರಿಗೆ ಸ್ಫೂರ್ತಿ, ಉತ್ಸಾಹವನ್ನು ತುಂಬುತ್ತಿದ್ದರು ಎಂದು ಬಣ್ಣಿಸಿದರೆ, ಶ್ರೀ ಎಂ.ಸಿ. ನರೇಂದ್ರ ಅವರು ತಮ್ಮ ತಂದೆ ಹೆಸರಿನ ಪ್ರತಿಷ್ಠಾನಕ್ಕೆ ಎಂ.ಎಚ್.ಕೆ.ಅವರಿಂದ ಆದ ಸೇವೆಯನ್ನು ಮನದುಂಬಿ ಮಾತನಾಡಿದರು.

೧ನೇ ಪುಟದಿಂದ

ಇವು ಕೂಡ ಸಮೃದ್ಧ ಮಾಹಿತಿಗಳನ್ನು ತುಂಬಿಕೊಂಡ ವಿಶಿಷ್ಟ ಕೃತಿಗಳು.

ಅಧ್ಯಾಪನದೊಂದಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ, ಪದವಿ ಕಾಲೇಜುಗಳ ಪ್ರಾಂಶುಪಾಲರಾಗಿ ಸಮರ್ಥ ಆಡಳಿತ ನಿರ್ವಹಣೆಯನ್ನೂ ಕೃಷ್ಣಯ್ಯನವರು ಮಾಡಿದ್ದಾರೆ. ಸಭೆ, ಸಮಾರಂಭ, ಅಧ್ಯಾಪನ, ಕೃತಿ ಸಂಪಾದನೆ, ಸಂಘ–ಸಂಸ್ಥೆಗಳ ಒಡನಾಟ ಹೀಗೆ ನಿರಂತರ ಒತ್ತಡದಲ್ಲಿದ್ದರೂ ಕನ್ನಡ ಸಾಹಿತ್ಯ–ಸಂಸ್ಕೃತಿ ಕ್ಷೇತ್ರದಲ್ಲಿ ಅವರ ಹೆಸರು ಚಿರಕಾಲ ಉಳಿಯುವಂಥ ೧೫ಕ್ಕೂ ಹೆಚ್ಚು ಕೃತಿಗಳನ್ನು ಕೃಷ್ಣಯ್ಯನವರು ಪ್ರಕಟಿಸಿದ್ದಾರೆ. ಆ ಕೃತಿಗಳು–ಕಾವ್ಯಭಾಷೆ, ಶೃಂಗಾರ ಲಹರಿ, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಆರ್. ಎಂ. ಹಡಪದ್, ನಾಟಕ ಮತ್ತು ಸೌಂದರ್ಯಪ್ರಜ್ಞೆ, ಆಲೋಕನ, ರೂಪಶಿಲ್ಪಿ ಬಸವಯ್ಯ, ಎಸ್. ಎಚ್. ಕುಲಕರ್ಣಿ, ತ್ಯಾಗಯೋಗಿ, ಎಚ್.ಕೆ. ವೀರಣ್ಣಗೌಡರು, ನಿಟ್ಟೂರು– ನೂರರ ನೆನಪು, ಅಜಂತ ಮತ್ತು ಎಲ್ಲೋರ, ಐತಿಹಾಸಿಕ ಕಾದಂಬರಿ : ಒಂದು ಸಮೀಕ್ಷೆ, ರಂಗಭೂಮಿ ಮತ್ತು ಸೌಂದರ್ಯ ಪ್ರಜ್ಞೆ, ಕಲಾಸಂಸ್ಕೃತಿ, ಸಾಹಿತ್ಯ–ಕಲೆ, ಗ್ರಹಿಕೆ ಮತ್ತು ಅಭಿವ್ಯಕ್ತಿ.

# ಸೆಪ್ಟಂಬರ್/ಅಕ್ಟೋಬರ್ ೨೦೨೨ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

೨೭-೦೯-೨೦೨೨ ಮಂಗಳವಾರ ಸಮಯ: ಸಂಜೆ ೫.೦೦
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

ಡಾ.ಕೆ.ರಾಜೇಶ್ವರಿ ದೊಡ್ಡರಂಗೇಗೌಡ ಸ್ಮಾರಕ ದತ್ತಿ ಕಾರ್ಯಕ್ರಮ

ವಿಷಯ : ಡಾ. ಕೆ. ರಾಜೇಶ್ವರಿಗೌಡ ಅವರ ಕಥಾಂತರಂಗ

ಉಪನ್ಯಾಸಕರು : ಡಾ. ಶಾಂತರಾಜು

---

೨೯-೦೯-೨೦೨೨ ಗುರುವಾರ ಸಮಯ: ಸಂಜೆ ೫.೦೦

ಶ್ರೀಮತಿ ಸಾವಿತ್ರಮ್ಮ-ಪ್ರೊ.ಎಂ.ವಿ.ಸೀ.ಸಾಹಿತ್ಯ ಪುರಸ್ಕಾರ

ಪುರಸ್ಕಾರ ಪ್ರದಾನ : ಶ್ರೀ ಗೋ.ರು. ಚನ್ನಬಸಪ್ಪ
ಜಾನಪದ ವಿದ್ವಾಂಸರು

ಪುರಸ್ಕೃತರು : ಪ್ರೊ. ಬಿ. ಜಯಪ್ರಕಾಶಗೌಡ
ಅಧ್ಯಕ್ಷರು, ಕರ್ನಾಟಕ ಸಂಘ, ಮಂಡ್ಯ

---

೦೪-೧೦-೨೦೨೨ ಮಂಗಳವಾರ ಸಮಯ: ಸಂಜೆ ೫.೦೦

ಶಂಬಾ ಜೋಶಿ ದತ್ತಿ ಕಾರ್ಯಕ್ರಮ

ವಿಷಯ : ಶಂಬಾ ಜೋಶಿ - ಜೀವನ ಮತ್ತು ಸಾಧನೆ

ಉಪನ್ಯಾಸಕರು : ಪ್ರೊ. ಆರ್. ವಸಂತಕುಮಾರ್
ಮುಖ್ಯಸ್ಥರು, ಕನ್ನಡ ವಿಭಾಗ, ಜೈನ್ ಕಾಲೇಜು

---

೧೪-೧೦-೨೦೨೨ ಶುಕ್ರವಾರ ಸಮಯ: ಸಂಜೆ ೫.೦೦

ಶ್ರೀ ಎಂ.ಎ. ರಾಮಾನುಜ ಅಯ್ಯಂಗಾರ್ ದತ್ತಿ ಕಾರ್ಯಕ್ರಮ

**ವಿಷಯ : ಸಂಶೋಧಕ ಕೆ.ಜಿ. ಕುಂದಣಗಾರ**

---

೨೦-೧೦-೨೦೨೨ ಗುರುವಾರ ಸಮಯ: ಸಂಜೆ ೫.೦೦

ಬೇಟೆರಾಯ ದೀಕ್ಷಿತರು, ಪ್ರೊ. ಬಿ.ರಾಮಸ್ವಾಮಿ, ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ ಮತ್ತು ಶ್ರೀಕಂಠಯ್ಯ
ದತ್ತಿ ಸಂಯುಕ್ತ ಕಾರ್ಯಕ್ರಮ

ವಿಷಯ : ಟಿ.ಎಸ್. ವೆಂಕಣ್ಣಯ್ಯ ಅವರ ಜೀವನ - ಸಾಧನೆ

ಉಪನ್ಯಾಸಕರು : ಡಾ. ಚಿತ್ತಯ್ಯ ಪೂಜಾರ್
ಪ್ರಾಧ್ಯಾಪಕರು. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾನಿಲಯ

---

೩೦-೧೦-೨೦೨೨ ಭಾನುವಾರ ಬೆಳಗ್ಗೆ : ೧೧-೦೦

ಶಾ. ಬಾಲುರಾವ್ ಯುವ ಬರಹಗಾರ ಮತ್ತು ಶಾ. ಬಾಲುರಾವ್ ಅನುವಾದ ಪ್ರಶಸ್ತಿ ಪ್ರದಾನ ಕಾರ್ಯಕ್ರಮ

---

ಸಾರಂಗಿ ವೆಂಕಟರಾಮಯ್ಯ ಹಾಗೂ ಪುಟ್ಟಚ್ಚಮ್ಮ ದತ್ತಿ ಪುರಸ್ಕಾರಕ್ಕೆ
ಜಯರಾಮ್ ರಾಯಪುರ ಅವರ 'ವರಸುದಾರ' ನಾಟಕ ಕೃತಿ ಆಯ್ಕೆಯಾಗಿದೆ.
ಪುರಸ್ಕಾರ ಪ್ರದಾನ ಕಾರ್ಯಕ್ರಮ ೨೦೨೨ ಅಕ್ಟೋಬರ್ ತಿಂಗಳಲ್ಲಿ ನಡೆಯಲಿದೆ.

---

ಕಾರಣಾಂತರಗಳಿಂದ ೨೦೨೨ ಸೆಪ್ಟೆಂಬರ್ ತಿಂಗಳ ಹೊಂಗನಸು ಪತ್ರಿಕೆಯನ್ನು ಪ್ರಕಟಿಸಲಾಗಲಿಲ್ಲ. ಅದಕ್ಕಾಗಿ ನಿಮ್ಮೆಲ್ಲರ ಕ್ಷಮೆ ಕೋರುತ್ತೇವೆ.

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೭.-೮-೨೦೨೨

**ಶ್ರೀಮತಿ ಬಿ.ಎಸ್. ರುಕ್ಮಿಣಮ್ಮ-ಶ್ರೀ ಬಿ.ಎಸ್. ಸೀತಾರಾಮರಾವ್ ದತ್ತಿ**

**ವಿಷಯ :'ಕನ್ನಡ ಸಾಹಿತ್ಯಕ್ಕೆ ಬೆಟಗೇರಿ ಕೃಷ್ಣಶರ್ಮ ಅವರ ಕೊಡುಗೆ'**

**ಉಪನ್ಯಾಸ : ಡಾ. ಪ್ರಮೀಳಾ ಮಾಧವ**




ಶ್ರೀಮತಿ ಬಿ.ಎಸ್. ರುಕ್ಮಿಣಮ್ಮ-ಶ್ರೀ ಬಿ.ಎಸ್. ಸೀತಾರಾಮರಾವ್ ದತ್ತಿ ಕಾರ್ಯಕ್ರಮದ ಅಂಗವಾಗಿ ಡಾ. ಪ್ರಮೀಳಾ ಮಾಧವ ಸಾಹಿತಿಗಳು, ವಿಮರ್ಶಕರು ಹಾಗೂ ನಿವೃತ್ತ ಪ್ರಾಧ್ಯಾಪಕರು ಇವರು 'ಕನ್ನಡ ಸಾಹಿತ್ಯಕ್ಕೆ ಬೆಟಗೇರಿ ಕೃಷ್ಣಶರ್ಮ ಅವರ ಕೊಡುಗೆ'ಯನ್ನು ಕುರಿತು ಉಪನ್ಯಾಸ ನೀಡಿದರು.

ಬೆಟಗೇರಿ ಕೃಷ್ಣಶರ್ಮ ಅವರ ಕೊಡುಗೆಯ ಬಗ್ಗೆ ಡಾ. ಪ್ರಮೀಳಾ ಮಾಧವ ಅವರು ಹೀಗೆ ಹೇಳಿದರು. ೧೯೦೦ರಲ್ಲಿ ಗೋಕಾಕ್ ತಾಲೂಕಿನ ಬೆಟಗೇರಿಯಲ್ಲಿ ಜನಿಸಿ ಬಹಳ ಸಂಕಷ್ಟಗಳನ್ನೆದುರಿಸಿದ ಇವರು ಒಮ್ಮೆ ಪ್ಲೇಗ್ ಮಾರಿಗೆ ತುತ್ತಾಗಿದ್ದರು. ತಂದೆ ತಾಯಿ ಹಾಕಿಕೊಟ್ಟ ಆದರ್ಶದ ದಾರಿಯನ್ನು ಚಾಚೂ ತಪ್ಪದೆ ಪಾಲಿಸಿದರು. ಸಾಹಿತ್ಯ ಮತ್ತು ಸಂಗೀತ ಎರಡರಲ್ಲೂ ಪ್ರಾವೀಣ್ಯತೆ ಹೊಂದಿದ್ದರು. ಸ್ವಾತಂತ್ರ್ಯ ಹೋರಾಟದಲ್ಲೂ ತೊಡಗಿಸಿಕೊಂಡ ಇವರು ಬೆಳಗಾವಿಯ ಮಾತೃಭೂಮಿ ಮತ್ತು ಸ್ವಧರ್ಮ ಪತ್ರಿಕೆಗಳ ಸಂಪಾದಕರಾಗಿ ಪತ್ರಿಕೋದ್ಯಮದ ಕೆಲಸ ಮಾಡಿದ್ದಾರೆ. ಕವಿಯಾಗಿ, ಕತೆಗಾರರಾಗಿ, ಕಾದಂಬರಿಕಾರರಾಗಿ, ಸಂಶೋಧಕರಾಗಿ, ವಿಮರ್ಶಕರಾಗಿ, ಪ್ರಬಂಧ ರಚನಕಾರರಾಗಿ ಕನ್ನಡ ಸಾಹಿತ್ಯಕ್ಕೆ ವಿಶೇಷವಾದ ಕೊಡುಗೆ ನೀಡಿದ್ದಾರೆ. ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಜಯಂತಿ, ಜಯಕರ್ನಾಟಕ ಪತ್ರಿಕೆಗಳಲ್ಲೂ ತಮ್ಮ ಸೇವೆ ಸಲ್ಲಿಸಿದ್ದಾರೆ. ಇವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಬಂದಿರುತ್ತವೆ.

ಕಾರ್ಯಕ್ರಮವು ಶ್ರೀ ಬಿ.ಎಸ್.ಗುರುಪ್ರಸಾದ್ ಅವರ ಸ್ವಾಗತ ಮತ್ತು ವಂದನಾರ್ಪಣೆಯೊಂದಿಗೆ ಮೂಡಿ ಬಂತು. ಡಾ. ಶಾಂತರಾಜು ಅವರು ಸಭೆಗೆ ಉಪನ್ಯಾಸಕರನ್ನು ಪರಿಚಯ ಮಾಡಿಕೊಟ್ಟರು. ಅಧ್ಯಕ್ಷರಾದ ಡಾ. ಬೈರಮಂಗಲ ರಾಮೇಗೌಡ ಅವರು ಪ್ರಸ್ತಾವನೆಯ ಮಾತುಗಳನ್ನಾಡಿದರು.

೨೬-೮-೨೦೨೨

**ಶ್ರೀ ಎ. ಸುಬ್ಬಯ್ಯ ಹೆಗಡೆ ಶಾಸ್ತ್ರೀ -ಶ್ರೀಮತಿ ಯಂ.ಕೆ. ವಿಜಯಲಕ್ಷ್ಮಿ , ಶ್ರೀ ಎನ್. ಅನಂತರಂಗಾಚಾರ್- ಅನಂತರಂಗ ಪ್ರತಿಷ್ಠಾನ ಸಂಯುಕ್ತ ದತ್ತಿ ಕಾರ್ಯಕ್ರಮ**

**ವಿಷಯ :"ದಲಿತ, ಬಂಡಾಯ ಸಾಹಿತ್ಯ ಹೊಸನೋಟ"**

**ಉಪನ್ಯಾಸ :ಡಾ. ಸುಬ್ರಮಣ್ಯಸ್ವಾಮಿ**




ಶ್ರೀ ಎ. ಸುಬ್ಬಯ್ಯ ಹೆಗಡೆ ಶಾಸ್ತ್ರೀ -ಶ್ರೀಮತಿ ಯಂ.ಕೆ. ವಿಜಯಲಕ್ಷ್ಮಿ , ಶ್ರೀ ಎನ್. ಅನಂತರಂಗಾಚಾರ್- ಅನಂತರಂಗ ಪ್ರತಿಷ್ಠಾನ ಇವುಗಳ ಸಂಯುಕ್ತ ದತ್ತಿ ಕಾರ್ಯಕ್ರಮದಲ್ಲಿ ಡಾ. ಸುಬ್ರಮಣ್ಯಸ್ವಾಮಿ ನಿರ್ದೇಶಕರು, ತೇಜಸ್ವಿ ಸಂಶೋಧನಾ ಕೇಂದ್ರ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು ಇವರು "ದಲಿತ, ಬಂಡಾಯ ಸಾಹಿತ್ಯ ಹೊಸನೋಟ" ಎಂಬ ವಿಷಯವನ್ನು ಕುರಿತು ವಿಶೇಷ ಉಪನ್ಯಾಸ ನೀಡಿ 'ದಲಿತ-ಬಂಡಾಯ ಸಾಹಿತ್ಯ ಕೇವಲ ಸೌಂದರ್ಯೋಪಾಸನೆ ಅಥವಾ ಬೌದ್ಧಿಕ ಕಸರತ್ತು ಅಲ್ಲ, ಅದೊಂದು ಸಾಮಾಜಿಕ ಜವಾಬ್ದಾರಿಯ ನಿರ್ವಹಣೆ. ಎಲ್ಲ ಬಗೆಯ ಶೋಷಣೆ, ಅಸಮಾನತೆ, ಅನ್ಯಾಯ, ದೌರ್ಜನ್ಯಗಳ ವಿರುದ್ಧ ಶ್ರಮ ಜೀವಿಗಳನ್ನು, ನೊಂದವರನ್ನು, ದಮನಿತರನ್ನು ಪ್ರತಿಭಟನೆಗೆ ಸಜ್ಜುಗೊಳಿಸುವುದೇ ಬಂಡಾಯ ಸಾಹಿತ್ಯದ ಮುಖ್ಯ ಗುರಿ. ಸ್ವಾತಂತ್ರ್ಯ ಬಂದು ೭೫ ವರ್ಷಗಳಾಗಿ ಅಮೃತೋತ್ಸವ ಸಂಭ್ರಮವನ್ನು ಆಚರಿಸುತ್ತಿರುವಾಗಲೂ ನಮಗೆ ಅಸ್ಪೃಶ್ಯತೆಯಿಂದ ಮುಕ್ತಿ ದೊರೆತಿಲ್ಲ. ದಲಿತರ ಮೇಲೆ ಜಾತಿಯ ಕಾರಣಕ್ಕೆ ಅನುಮಾನುಷವಾದ ಹಲ್ಲೆಗಳು ನಡೆಯುತ್ತಿರುವುದು ನಿತ್ಯ ಸುದ್ದಿಯಾಗಿದೆ. ಸಿದ್ದಲಿಂಗಯ್ಯನವರು ಕವಿತೆಯಲ್ಲಿ ಬರೆದಂತೆ 'ಯಾರಿಗೆ ಬಂತು? ಎಲ್ಲಿಗೆ ಬಂತು? ೪೭ರ ಸ್ವಾತಂತ್ರ್ಯ' ಎಂದು ಪ್ರಶ್ನಿಸಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಅದರಿಂದಾಗಿಯೇ ಸಾಹಿತಿ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯಿಂದ ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ, ವರ್ಣಭೇದ ನೀತಿಯನ್ನು ವಿರೋಧಿಸುವ ತಾತ್ವಿಕ ನೆಲೆಗಟ್ಟನ್ನು ಹೊಂದಿದೆ. ಅಭಿವ್ಯಕ್ತಿಯಲ್ಲಿ ಯಾವುದೇ ಮಾರ್ಗವನ್ನು ಅನುಸರಿಸಿದರೂ ಕ್ರೂರ ವ್ಯವಸ್ಥೆಯ ವಿರೋಧಿ ನೆಲೆಯೊಂದು ಬಂಡಾಯ ಸಾಹಿತ್ಯದಲ್ಲಿ ಇದ್ದೇ ಇರುತ್ತದೆ. ಬಂಡಾಯ ಸಾಹಿತಿ ಸಾಮಾಜಿಕ ಸಂಬಂಧಗಳಲ್ಲಿ ಅಡಗಿ ಕುಳಿತಿರುವ ಮೋಸ ಮತ್ತು ಅಮಾನವೀಯತೆಯನ್ನು ಗುರುತಿಸಿ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಸ್ಫೋಟಗೊಳ್ಳಬೇಕಾಗುತ್ತದ" ಎಂದು ಹೇಳಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಬೈರಮಂಗಲ ರಾಮೇಗೌಡ ಅವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿಕೊಂಡು ಪ್ರಾಸ್ತಾವಿಕವಾಗಿ ಮಾತನಾಡುತ್ತಾ "ಕನ್ನಡದ ಎಲ್ಲ ಪ್ರಜ್ಞಾವಂತ, ಸಂವೇದನಾಶೀಲ ಕವಿಗಳೂ ಸಾಂದರ್ಭಿಕವಾಗಿ ವ್ಯವಸ್ಥೆಯ ವಿರುದ್ಧದ ಸಿಟ್ಟನ್ನೂ ಆಕ್ರೋಶವನ್ನೂ ವ್ಯಕ್ತಪಡಿಸಿದ್ದಾರೆ. ಅಂದರೆ ಪ್ರತಿಭಟನೆಯ ಆಶಯ ಕನ್ನಡ ಕಾವ್ಯಗಳಲ್ಲಿ ನಿರಂತರವಾಗಿ ವ್ಯಕ್ತವಾಗುತ್ತಲೇ ಬಂದಿದೆ. ೧೯೭೦ರ ದಶಕದಲ್ಲಿ ನಡೆದ ಹಲವು ಸಾಮಾಜಿಕ, ರಾಜಕೀಯ ಘಟನೆಗಳು ಜನಸಾಮಾನ್ಯರ ಬದುಕಿನಲ್ಲಿ ಬದಲಾವಣೆಗಳನ್ನು ತಂದವು. ಅಲ್ಲಿ ಉಂಟಾದ ಕೋಲಾಹಲದಿಂದ ಸಾಹಿತ್ಯದಲ್ಲೂ ಬದಲಾವಣೆ ಅನಿವಾರ್ಯವೆನ್ನಿಸಿ ಬಂಡಾಯದ ಧ್ವನಿ ಮೊಳಗಿತು. ಈ ದಿಸೆಯಲ್ಲಿ ಸಂಘಟನೆಗೊಂಡ ಬಂಡಾಯ ಸಾಹಿತಿಗಳ ಸಮ್ಮೇಳನವು ಶೋಷಿತ ವರ್ಗಗಳ ಪರವಾಗಿ ಧ್ವನಿಯೆತ್ತ 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎಂದ ಘೋಷಣೆಯನ್ನು ಮೊಳಗಿಸಿದರು" ಎಂದು ಹೇಳಿದರು.

ಡಾ. ಶಾಂತರಾಜು ಅವರು ಸ್ವಾಗತ ಕೋರಿ ಉಪನ್ಯಾಸಕರನ್ನು ಪರಿಚಯ ಮಾಡಿಕೊಟ್ಟರು. ದತ್ತಿಗಳ ವಿವರವನ್ನು ನೀಡಿದ ಶ್ರೀ ಬಿ.ಎಸ್. ಗುರುಪ್ರಸಾದ್‌ರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

# ಹೊಸ ಸದಸ್ಯರು

## ೨೦೨೨–೨೦೨೫ ಅವಧಿಗೆ ೪೨ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಚುನಾಯಿತರಾದ ಸದಸ್ಯರನ್ನು ಹೊಂಗನಸು ಅಭಿನಂದಿಸುತ್ತದೆ.

### ಶ್ರೀ ಬಿ.ಆರ್. ರವೀಂದ್ರನಾಥ್



ಮಾಜಿ ಬ್ಯಾಂಕ್ ಅಧಿಕಾರಿ, ವಿತ್ತೀಯ ಸಲಹೆಗಾರ, ಅನುವಾದಕ, ಲೇಖಕ, ನಿರ್ದೇಶಕ, ಇನ್ಸ್‌ಟಿಟ್ಯೂಟ್ ಆಫ್ ಟ್ರಾನ್ಸ್‌ಲೇಷನ್ ಸ್ಟಡೀಸ್, ಬೆಂಗಳೂರು ಹಲವಾರು ಸಮಿತಿಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಸದಸ್ಯರಾಗಿ ಕಾರ್ಯನಿರ್ವಹಿಸು ತ್ತಿದ್ದಾರೆ. ಇವರ ಆರು ಕೃತಿಗಳು ಪ್ರಕಟಣೆಗೊಂಡಿವೆ. ದೂರದರ್ಶನ ಹಾಗೂ ಆಕಾಶವಾಣಿ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ.

ಇವರು ಫೆಬ್ರವರಿ ೨೦೧೪ರಿಂದ ಮಾರ್ಚ್ ೨೦೨೦ರ ವರೆಗೆ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಬಿ.ಎಂ.ಶ್ರೀ. ಪ್ರತಿಷ್ಠಾನದ ಹೊಂಗನಸು ಮಾಸ ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ೨೦೧೩ರಿಂದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ೪ನೆ ಬಾರಿಗೆ ಚುನಾಯಿತರಾಗಿದ್ದಾರೆ.

### ಡಾ॥ ಎಸ್. ಅನಿಲ್‌ಕುಮಾರ್



ವಾಣಿಜ್ಯಶಾಸ್ತ್ರ ಪ್ರಾಧ್ಯಾಪಕರಾದ ಇವರು ಪ್ರಸ್ತುತ ಎಸ್.ಆರ್.ಎನ್. ಆದರ್ಶ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದಾರೆ. ಉದಯಭಾನು ಕಲಾ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರಾಗಿ, ಸಂಸ್ಥೆಯ ಉಚಿತ ಉಪನ್ಯಾಸ ತರಗತಿಯಲ್ಲಿ ವಾಣಿಜ್ಯ ವಿಷಯವನ್ನು ಬೋಧಿಸುತ್ತಿರುವುದಲ್ಲದೆ, ಅನೇಕ ಸಾಮಾಜಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಗಳನ್ನು ಗಣಕೀಕರಣಗೊಳಿಸುವ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಇವರು ೨೦೧೬ರಿಂದ ಇಲ್ಲಿಯವರೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಖಜಾಂಚಿಯಾಗಿ ಎರಡು ಅವಧಿಗೆ ಸೇವೆ ಸಲ್ಲಿಸಿ ನಿವೃತ್ತರಾಗಲಿದ್ದಾರೆ. ೨೦೧೩ರಿಂದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ೪ನೆ ಬಾರಿಗೆ ಚುನಾಯಿತರಾಗಿದ್ದಾರೆ.

ಇವರು ಪ್ರತಿಷ್ಠಿತ ಕೆಂಪೇಗೌಡ ಪ್ರಶಸ್ತಿ ಪುರಸ್ಕಾರವನ್ನು ಪಡೆದಿರುತ್ತಾರೆ.

### ಪ್ರೊ. ಜಿ. ಅಶ್ವತ್ಥನಾರಾಯಣ



ಸರ್ಕಾರಿ ಪದವಿ ಕಾಲೇಜುಗಳಲ್ಲಿ ೩೦ ವರ್ಷ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರು. ಹಂಪಿ ಕನ್ನಡ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರು, ಕೆ.ಎ.ಎಸ್. ಐಎಎಸ್ ವಿದ್ಯಾರ್ಥಿಗಳಿಗೆ ತರಬೇತಿ, ಸರ್ಕಾರಿ ಅಧಿಕಾರಿಗಳಿಗೆ ಆಡಳಿತ ಕನ್ನಡ ಶಿಬಿರಗಳನ್ನು ನಡೆಸಿದ್ದಾರೆ. ಅಮೇರಿಕಾದಲ್ಲಿ ಮಕ್ಕಳಿಗೆ ಕನ್ನಡ ಹೇಳಿಕೊಟ್ಟಿದ್ದಾರೆ. ಸಂಶೋಧನೆಗಾಗಿ, ಸಂಪಾದಕರಾಗಿ ಅನೇಕ ಕೃತಿಗಳನ್ನು ಹೊರತಂದಿದ್ದಾರೆ.

ಇವರು ೬–೧೦–೨೦೦೧ರಿಂದ ಕಾರ್ಯಸಮಿತಿ ಸದಸ್ಯರು ೨೩–೩–೨೦೦೩ರವರೆಗೆ, ೧೧–೪–೨೦೦೫ರಿಂದ ೨೬–೫–೨೦೦೯ ರವರೆಗೆ, ೨೯–೩–೨೦೧೦ ರಿಂದ ೨೩–೫–೨೦೧೫ ರವರೆಗೆ, ೮–೮–೨೦೧೬ ರಿಂದ ೨೦೧೯ ರವರೆಗೆ, ೨೦೧೯ ರಿಂದ ೨೦೨೨ ರವರೆಗೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ಮತ್ತೊಮ್ಮೆ ಚುನಾಯಿತರಾಗಿದ್ದಾರೆ.

### ಪ್ರೊ. ಜಿ.ಅಬ್ದುಲ್ ಬಷೀರ್



ಬಹುಮುಖಿ ಚಿಂತಕರೂ, ನಿವೃತ್ತ ಕನ್ನಡ ಪ್ರಾಧ್ಯಾಪಕರೂ, ಹೆಸರಾಂತ ಸಾಹಿತಿಗಳು. ಕವಿಯಾಗಿ, ಸಂಶೋಧಕರಾಗಿ, ವಿಮರ್ಶಕರಾಗಿ, ಸಂಪಾದಕರಾಗಿ ಪ್ರಬಂಧಕರಾಗಿ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆ. ಅನ್ಯಭಾಷಿಕರಿಗೆ ಅಲ್–ಅಮೀನ್ ಕಾಲೇಜು, ಸೆಂಟ್ರಲ್ ಕಾಲೇಜುಗಳಲ್ಲಿ, ಬಿ.ಇ.ಟಿ. ಕಾಲೇಜು ೨೦ವರ್ಷ ಕನ್ನಡ ಕಲಿಸಿದ್ದಾರೆ. ಇವರಿಗೆ ಕೆಂಪೇಗೌಡ ಪ್ರಶಸ್ತಿ, ಉತ್ತಮ ಶಿಕ್ಷಕ ಪ್ರಶಸ್ತಿ, ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ ವಿದ್ವತ್ ದತ್ತಿ ಪ್ರಶಸ್ತಿ, ಗಂಗಾಧರಯ್ಯ ಮತ್ತು ಮಕ್ಕಳ ಸಾಹಿತ್ಯ ದತ್ತಿ ಪ್ರಶಸ್ತಿ ಇನ್ನು ಹಲವಾರು ಪ್ರಶಸ್ತಿ ಮತ್ತು ಪುರಸ್ಕಾರಗಳು ದೊರೆತಿವೆ. ಈ ಹಿಂದೆ ೮–೯–೨೦೧೨ ರಿಂದ ೪–೬–೨೦೧೭ರವರೆಗೆ ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಹಿಂದಿನ ಕಾರ್ಯಕಾರಿ ಸಮಿತಿಯಲ್ಲಿಯೂ ಕರ್ತವ್ಯ ನಿರ್ವಹಿಸಿ ಇವರು ಈಗ ಪುನರ್ ಆಯ್ಕೆಗೊಂಡಿದ್ದಾರೆ. ಈ ಹಿಂದೆ ಇವರು ೨೦೦೬ರಿಂದ ೨೦೧೫ರವರೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನಾ' ದ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಜೊತೆಗೆ ಕನ್ನಡ ಸಾಹಿತ್ಯ ಪರಿಶತ್ತು ಪ್ರಕಟಿಸುವ 'ಪರಿಶತ್ಪತ್ರಿಕೆ' ಯ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.

ಇವರು ೨೦೧೯ರಿಂದ ೨೦೨೨ ರವರೆಗೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ಮತ್ತೊಮ್ಮೆ ಚುನಾಯಿತರಾಗಿದ್ದಾರೆ

### ಶ್ರೀ ಸಂಗಮೇಶ ಬಾದವಾಡಗಿ



ಶ್ರೀ ಸಂಗಮೇಶ ಬಾದವಾಡಗಿಯವರು ಎಂ.ಎ. (ಕನ್ನಡ) ಪದವೀಧರರು. ಶ್ರೀಯುತರು ಶಿಕ್ಷಣ ಮತ್ತು ಆಹಾರ ನಾಗರೀಕ ಸರಬರಾಜು ಇಲಾಖೆಯಲ್ಲಿ ಸೇವೆ ಸಲ್ಲಿಸಿದ ನಂತರ ಕೊನೆಯಲ್ಲಿ ವಿಧಾನಸೌಧದ ಕರ್ನಾಟಕ ರಾಜ್ಯಗಡಿ ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷಾಧಿಕಾರಿಯಾಗಿ ನಿವೃತ್ತಿ ಹೊಂದಿದವರು. ಸಾಹಿತಿಗಳೂ ಆಗಿರುವ ಶ್ರೀಯುತರು ಎರಡು ಅವಧಿಗೆ ರಾಜ್ಯ ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ. ಕುಷ್ಟಗಿ ತಾಲೂಕು ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿಯೂ ಗೌರವಕ್ಕೆ ಭಾಜನರಾಗಿದ್ದಾರೆ.

ಶ್ರೀಯುತರು ಹದಿನೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ರಾಜ್ಯಮಟ್ಟದ, ಅಂತಾರಾಷ್ಟ್ರೀಯ ಮಟ್ಟದ ಸಂಸ್ಥೆಗಳಿಂದ ಪ್ರಶಸ್ತಿಗಳಿಗೂ ಭಾಜನರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿಯು ಕಾರ್ಯ ನಿರ್ವಹಿಸಿದ್ದಾರೆ. ಇವರು ಇವರು ೨೦೧೬ರಿಂದ ೨೦೧೯ ರವರೆಗೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ಮತ್ತೊಮ್ಮೆ ಚುನಾಯಿತರಾಗಿದ್ದಾರೆ

**೨೦೧೯-೨೦೨೨ರ ಅವಧಿಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿ ನಿವೃತ್ತರಾದ ಸದಸ್ಯರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನವು ಧನ್ಯವಾದಗಳನ್ನು ಅರ್ಪಿಸುತ್ತದೆ.**

**ಡಾ. ಬಿ.ಸಿ.ರಾಜಕುಮಾರ್**



ವಿಜಯ ಕಾಲೇಜಿನ ಕನ್ನಡ ವಿಭಾಗದಲ್ಲಿ ಸಹಪ್ರಾಧ್ಯಾಪಕರಾಗಿ ೨೬ ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಮತ್ತು ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವುದರೊಂದಿಗೆ ವಿವಿಧ ಸಂಸ್ಥೆಗಳ ಜೊತೆ ನಿಕಟ ಸಂಬಂಧ ಹೊಂದಿದ್ದಾರೆ. ಲೇಖಕರಾಗಿ ಕೃತಿ ರಚನೆ ಮಾಡಿದ್ದಾರೆ. ಇವರು ೨೦೧೯ರಿಂದ ೨೦೨೨ ರವರೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ನಿವೃತ್ತರಾಗಿದ್ದಾರೆ

**ಶ್ರೀನಿವಾಸ ಮೂರ್ತಿ**



ಶ್ರೀ ಶ್ರೀನಿವಾಸ ಮೂರ್ತಿ ಕೆನರಾಬ್ಯಾಂಕ್ ಅಧಿಕಾರಿಯಾಗಿ ನಿವೃತ್ತರಾಗಿದ್ದಾರೆ. ಸಹ್ಯಾದ್ರಿ ಸಂಘ, ಜೆಸಿಬಿಎಮ್ ಹಿರಿಯ ವಿದ್ಯಾರ್ಥಿಗಳ ಸಂಘ, ಬೆಂಗಳೂರಿನ ಫಿಲಂ ಸೊಸೈಟಿ, ಭಾರತೀಯ ವಿದ್ಯಾಸಂಸ್ಥೆ ಇನ್ನಿತರ ಸಂಘ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಕವಿಯಾಗಿ ನಾಲ್ಕು ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರು ೨೦೧೯ರಿಂದ ೨೦೨೨ ರವರೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದು ಈಗ ನಿವೃತ್ತರಾಗಿದ್ದಾರೆ

**ಡಾ.ಹೆಚ್.ಎಸ್. ಎಂ.ಪ್ರಕಾಶ್**



ಡಾ.ಹೆಚ್.ಎಸ್. ಎಂ.ಪ್ರಕಾಶ್ ಜನಪ್ರಿಯ ಭೂವಿಜ್ಞಾನಿಯಾಗಿರುವ ಇವರು ಭಾರತದಾದ್ಯಂತ ಸೇವೆ ಸಲ್ಲಿಸಿದ್ದಾರೆ. ಪರಿಸರದ ವೈಪರೀತ್ಯಗಳನ್ನು ಕುರಿತು ಅರಿವು ಮೂಡಿಸುವ ಇವರು ಲೇಖಕರಾಗಿ ಅನುವಾದಕರಾಗಿ, ಹಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ಹವಾಮಾನ ಬದಲಾವಣೆಗೆ ಮೂಲಕಾರಣ, ಹಲವು ಶಿಲಾಪದರಗಳಲ್ಲಿ ಆಗುವ ಬದಲಾವಣೆ ಎಂಬ ಭೂವೈಜ್ಞಾನಿಕ ಅಂತ ಭಾಷಣಗಳು ಹಾಗೂ ಟಿ.ವಿ. ಮಾಧ್ಯಮಗಳ ಮೂಲಕ ಚಿರಪರಿಚಿತರಾಗಿದ್ದಾರೆ.

ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದು ಹಲವಾರು ಕೃತಿಗಳನ್ನು ಅನುವಾದಿಸಿರುತ್ತಾರೆ. ಇವರ ಅನುವಾದ ಕೃತಿಗಳು. ಕೇಂದ್ರ ಸಾಹಿತ್ಯ ಅಕಾಡೆಮಿ, ಕುವೆಂಪು ಭಾಷಾಭಾರತಿ ಪ್ರಾಧಿಕಾರ ಮತ್ತು ನವಕರ್ನಾಟಕ ಪ್ರಕಾಶನದ ವತಿಯಿಂದ ಪ್ರಕಟವಾಗಿವೆ.



ಕಿರುಪರಿಚಯ

**ಡಾ. ಪ್ರಮೀಳಾ ಮಾಧವ್** ಎಂ.ಎ., ಪಿಎಚ್.ಡಿ



೧೯೭೫ ರಿಂದ ೧೯೮೧ರ ವರೆಗೆ ದ.ಕ.ದ ಪುತ್ತೂರಿನ ಶ್ರೀ ವಿವೇಕಾನಂದ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕಿ.

೧೯೮೧ರಿಂದ ಬೆಂಗಳೂರಿನ ಎ.ಪಿ.ಎಸ್. ಕಾಲೇಜಿನಲ್ಲಿ ವೃತ್ತಿಯ ಮುಂದುವರಿಕೆ. ೧೯೯೧ರಲ್ಲಿ ಆಯ್ಕೆಶ್ರೇಣಿ ಉಪನ್ಯಾಸಕಿಯಾಗಿ ನೇಮಕ. ೧೯೯೫ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ. ೨೦೦೫ರಿಂದ ೨೦೧೧ ರವರೆಗೆ ಕನ್ನಡ ವಿಭಾಗದ ಮುಖ್ಯಸ್ಥೆಯಾಗಿ ಕಾರ್ಯ ನಿರ್ವಹಣೆ. ೨೦೧೨-೧೫ರಲ್ಲಿ ಬೆಂಗಳೂರಿನ ಕನಕಪುರ ತಾಲೂಕಿನ ರೂರಲ್ ಕಾಲೇಜಿನ ಸ್ನಾತಕೋತ್ತರ ಕೇಂದ್ರದಲ್ಲಿ ಪ್ರಾಧ್ಯಾಪಿಕೆಯಾಗಿ ನೇಮಕ. ಇವರದು ೩೭ ವರ್ಷಗಳ ಅಧ್ಯಾಪನ.

ಕನ್ನಡ ಸಾಹಿತ್ಯ, ಸಂಸ್ಕೃತಿಗಳ ಅಧ್ಯಯನ, ಬರವಣಿಗೆ, ಭಾಷಣ. ಪಿಎಚ್.ಡಿ. ಮತ್ತು ಎಂ.ಫಿಲ್. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ. ಸ್ನಾತ-ಕೋತ್ತರ ತರಗತಿಗಳಿಗೆ ಸಂಪನ್ಮೂಲ ವ್ಯಕ್ತಿಯಾಗಿ ವಿಶೇಷ ತರಬೇತಿ, ಹಳಗನ್ನಡ ಕಾವ್ಯಗಳ ಸರಣಿ ಪಾಠ.

ಬರವಣಿಗೆ: ಕತೆ, ಕಾದಂಬರಿ, ಅನುವಾದ, ಸಂಶೋಧನೆ, ವಿಮರ್ಶೆ, ಜೀವನ ಚರಿತ್ರೆ, ಸಂಪಾದನೆ ಕ್ಷೇತ್ರಗಳಲ್ಲಿ ಈ ವರೆಗೆ ೪೮ ಕೃತಿಗಳ ರಚನೆ. ೨೦೧೭ರಲ್ಲಿ ಶಂಪಾ ಪ್ರತಿಷ್ಠಾನವೆಂಬ ಸಂಸ್ಥೆ ಸ್ಥಾಪನೆ. ಕನ್ನಡೇತರರಿಗೆ ಕನ್ನಡ ಕಲಿಕೆ ಅಭಿಯಾನ, ವಿಚಾರಸಂಕಿರಣ, ಕವಿಕಾವ್ಯ ಪರಿಚಯ, ಕವಿಗೋಷ್ಠಿ, ಉಪನ್ಯಾಸ, ಪ್ರತಿಭಾ ಪುರಸ್ಕಾರ ಇತ್ಯಾದಿ ಸಾಹಿತ್ಯಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು.

ಮಹಾತ್ಮ ಜ್ಯೋತಿಬಾ ಫುಲೆ, ಸಾವಿತ್ರಿ ಬಾಯಿ ಫುಲೆ, ಎಚ್. ನರಸಿಂಹಯ್ಯ, ದೇವರ ದಾಸಿಮಯ್ಯ, ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ, ಪುಷ್ಪಾಂಜಲಿ, ಬನಶ್ರೀ, ರಂಗಚಿನ್ನಾರಿ ಮುಂತಾದ ಪ್ರಶಸ್ತಿಗಳಿಗೆ ಭಾಜನ.

**ಡಾ.ಸುಬ್ರಹ್ಮಣ್ಯ ಸ್ವಾಮಿ,** ಎಂ.ಎ. ಪಿಹೆಚ್.ಡಿ ಎಲ್.ಎಲ್.ಬಿ , ಸ್ನಾತಕೋತ್ತರ ಕನ್ನಡ ಪತ್ರಿಕೋದ್ಯಮ ಡಿಪ್ಲೊಮಾ ಪದವಿ.



ನಿರ್ದೇಶಕರು, ತೇಜಸ್ವಿ ಕನ್ನಡ ಸಂಶೋಧನಾ ಕೇಂದ್ರ, ಮುಖ್ಯಸ್ಥರು,ಕನ್ನಡ ವಿಭಾಗ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು. ಕರ್ನಾಟಕದ ಸಂಶೋಧಕರ ಒಕ್ಕೂಟದ ಕೋಶಾಧ್ಯಕ್ಷರು. ಬೆಂಗಳೂರು ವಿಶ್ವವಿದ್ಯಾಲಯ ಕಾಲೇಜು ಅಧ್ಯಾಪಕರ ಸಂಘದ ಜಂಟಿ ಕಾರ್ಯದರ್ಶಿ. ಸಂಕ್ರಾಂತಿ ಸಾಹಿತಿ ಕಲಾವಿದರ ವೇದಿಕೆ ಕಾರ್ಯದರ್ಶಿ.

ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು ನೌಕರರ ಸಂಘದ ಅಧ್ಯಕ್ಷರೂ ಆಗಿದ್ದಾರೆ. ३೩ ವರ್ಷಗಳ ಅಧ್ಯಾಪನ ವೃತ್ತಿ ಹಾಗೂ ಕನ್ನಡ ಎಂ.ಎ. ಮತ್ತು ಪದವಿ ತರಗತಿಗಳಿಗೆ ಬೋಧನೆ.

'ಯಶವಂತ ಚಿತ್ತಾಲ ಮತ್ತು ವ್ಯಾಸರಾಯ ಬಲ್ಲಾಳರ ಕಾದಂಬರಿಗಳ ತೌಲನಿಕ ಅಧ್ಯಯನ' ಎಂಬ ವಿಷಯ ಕುರಿತ ಸಂಶೋಧನೆಗೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪ್ರದಾನ ಮಾಡಲಾಗಿದೆ. ಸಂಶೋಧನಾ ಮಾರ್ಗದರ್ಶಕರಾಗಿ ಪ್ರಸ್ತುತ ೦೪ ವಿದ್ಯಾರ್ಥಿಗಳು ಇವರ ಮಾರ್ಗದರ್ಶನದಲ್ಲಿ ಸಂಶೋಧನೆ ಮಾಡುತ್ತಿದ್ದಾರೆ.

ಸಂಸ ಪ್ರಶಸ್ತಿ ಪುರಸ್ಕೃತರು.

'ಕರ್ನಾಟಕದ ರಾಣಿಯರು ಮತ್ತು ಆಡಳಿತ ನೀತಿ' ಎಂಬ ವಿಷಯ ಕುರಿತು ಶಾಸ್ತ್ರೀಯ ಸ್ಥಾನಮಾನ ಅನುದಾನ ಯೋಜನೆ ಅಡಿಯಲ್ಲಿ ಪುಸ್ತಕ ಪ್ರಕಟಗೊಂಡಿದೆ.

ಹಲವಾರು ರಾಜ್ಯ ,ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣಗಳಲ್ಲಿ ವಿಚಾರ ಮಂಡನೆ ಮಾಡಿದ್ದಾರೆ ಹಾಗೂ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

೨೦ಕ್ಕೂ ಹೆಚ್ಚು ಲೇಖನಗಳು ಪ್ರಕಟಗೊಂಡಿವೆ. 'ಹೊನ್ನಿ ರೋಗ' ಎನ್ನುವ ನಾಟಕ ರಚಿಸಿದ್ದಾರೆ.

Daily News

shutterstock.com · 265003949

# ಪತ್ರಿಕಾ ನೆನಪು




## ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಪ್ರೊ. ಎಂ.ಎಚ್. ಕೃಷ್ಣಯ್ಯ ನಿಧನ

ಒಂದನೇ ಪುಟದಿಂದ...

1937ರ ಜುಲೈ 21ರಂದು ಮೈಸೂರಿನಲ್ಲಿ ಕೃಷ್ಣಯ್ಯ ಜನಿಸಿದ್ದರು. ತಂದೆ ಹುಚ್ಚಯ್ಯ ಹಾಗೂ ತಾಯಿ ಕೆಂಪಮ್ಮ. ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎ ಮತ್ತು ಎಂ.ಎ ಪದವಿ ಪಡೆದಿದ್ದ ಕೃಷ್ಣಯ್ಯ, ಪ್ರಾಧ್ಯಾಪಕರಾಗಿ ವೃತ್ತಿ ಆರಂಭಿಸಿದ್ದರು. ಬೆಂಗಳೂರು, ಕೋಲಾರ ಸೇರಿದಂತೆ ಹಲವು ಸರ್ಕಾರಿ ಕಾಲೇಜುಗಳಲ್ಲಿ ಕೆಲಸ ಮಾಡಿ ನಿವೃತ್ತರಾಗಿದ್ದರು.

ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಆರ್.ಎಂ.ಹಡಪದ, ರೂಪಶಿಲ್ಪಿ ಬಸವಯ್ಯ, ಶೃಂಗಾರ ಲಹರಿ, ಕಲಾ ದರ್ಶನ, ರಂಗಭೂಮಿ ಮತ್ತು ಸೌಂದರ್ಯ ಪ್ರಜ್ಞೆ ಸೇರಿದಂತೆ 30ಕ್ಕೂ ಹೆಚ್ಚು ಕೃತಿಗಳನ್ನು ಕೃಷ್ಣಯ್ಯ ರಚಿಸಿದ್ದರು. 'ಕುವೆಂಪು ಸಾಹಿತ್ಯ: ಚಿತ್ರ ಸಂಪುಟ' ಕೃತಿಯನ್ನೂ ಸಂಪಾದಿಸಿದ್ದರು.

ಕನ್ನಡ ವಿಶ್ವವಿದ್ಯಾಲಯದ ಸಿಂಡಿಕೇಟ್, ಕನ್ನಡ ಪುಸ್ತಕ ಪ್ರಾಧಿಕಾರ, ತಂಜಾವೂರಿನ ದಕ್ಷಿಣ ಭಾಗೀಯ ಸಾಂಸ್ಕೃತಿಕ ಕೇಂದ್ರ, ಉದಯಭಾನು ಕಲಾ ಸಂಘದಲ್ಲಿ ಕೃಷ್ಣಯ್ಯ ಸಕ್ರಿಯರಾಗಿದ್ದರು. ಕರ್ನಾಟಕ ಸಾಹಿತ್ಯ ಅಕಾಡಮಿ ಅಧ್ಯಕ್ಷರಾಗಿಯೂ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಕೊಡುಗೆ ನೀಡಿದ್ದರು.

ಲಲಿತ ಕಲಾ ಅಕಾಡೆಮಿ ಪುರಸ್ಕಾರ, ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕುವೆಂಪು ಪ್ರಶಸ್ತಿ, ಮಾಸ್ತಿ ಪ್ರಶಸ್ತಿ ಸಂದಿತ್ತು.

'ತುಂಬಾ ಪ್ರೀತಿ, ಬದ್ಧತೆ, ಪ್ರಾಮಾಣಿಕತೆ ಕೃಷ್ಣಯ್ಯ ಅವರಲ್ಲಿ ಇತ್ತು. ಲಲಿತಕಲೆ ಅಕಾಡೆಮಿಯಲ್ಲಿ ಹಡಪದ್ ಅವರೊಂದಿಗೆ ಸೇರಿಕೊಂಡು ಬೇಕಾದಷ್ಟು ಕೆಲಸವನ್ನು ಮಾಡಿದರು. ಶೇಷಾದ್ರಿಪುರಂ ಕಾಲೇಜಿನಲ್ಲಿ ನಾವಿಬ್ಬರೂ ಒಟ್ಟಿಗೆ ಪಾಠ ಮಾಡುತ್ತಿದ್ದೆವು. ಅವರನ್ನು ನೋಡಿಯೂ ಬಲ್ಲೆ. ಅವರು ಶೇ 100ರಷ್ಟು ಜಾತ್ಯತೀತರು. ವೈಯಕ್ತಿಕವಾಗಿ ನನಗೆ ಅತ್ಯಂತ ದೊಡ್ಡ ನಷ್ಟ' ಎಂದು ವಿಮರ್ಶಕ ಎಚ್.ಎಸ್. ರಾಘವೇಂದ್ರ ರಾವ್ ಹೇಳಿದರು.

### 'ಕಲೆಗಳ ನಡುವಿನ ಸೇತುವೆ'

'ನಾನು ಕಂಡ ಅತ್ಯಂತ ಬದ್ಧ, ಪ್ರಾಮಾಣಿಕ ಅಧ್ಯಾಪಕರಲ್ಲಿ ಕೃಷ್ಣಯ್ಯ ಅವರೂ ಒಬ್ಬರು. ವಿಶೇಷ ಎಂದರೆ, ಸಾಮಾನ್ಯವಾಗಿ ಕನ್ನಡ ಮೇಷ್ಟ್ರು ಕನ್ನಡ ಸಾಹಿತ್ಯದಿಂದ ಹೊರಗೆ ಹೋಗುವುದು ತೀರಾ ಅಪರೂಪ. ಬೇರೆ ಭಾಷೆಗಳ ಸಾಹಿತ್ಯ ಮಾತ್ರ ಅಲ್ಲ, ಯುರೋಪಿಯನ್ ಚಿತ್ರಕಲೆ, ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತ, ಶಿಲ್ಪ ಮುಂತಾದ ಕ್ಷೇತ್ರಗಳ ಬಗ್ಗೆಯೂ ಆಳವಾಗಿ ತಿಳಿದುಕೊಂಡಿದ್ದ ಸಾಹಿತಿ ಅವರು. ಭಾರತೀಯ ಕಲೆಗಳು ಬಹುತೇಕರಿಗೆ ಗೊತ್ತಿರಬಹುದು. ಆದರೆ, ಪಾಶ್ಚಿಮಾತ್ಯ ನೃತ್ಯ, ಚಿತ್ರಕಲೆಗಳ ಬಗ್ಗೆ ಸಾಕಷ್ಟು ಅರಿತುಕೊಂಡಿದ್ದ ವಿರಳರು. ಅವುಗಳ ಬಗ್ಗೆ ಅವರು ಆಸಕ್ತಿ ಹೊಂದಿ, ಕೇಳಿ ತಿಳಿದುಕೊಂಡಿದ್ದರು. ಅವುಗಳ ಬಗ್ಗೆ ಬರೆದಿದ್ದಾರೆ. ಒಟ್ಟಾರೆಯಾಗಿ ಬೇರೆ ಬೇರೆ ಕಲೆಗಳ ನಡುವಿನ ಸೇತುವೆಯಾಗಿದ್ದರು' ಎಂದು ವಿಮರ್ಶಕ ಎಚ್.ಎಸ್. ರಾಘವೇಂದ್ರ ರಾವ್ ಸ್ಮರಿಸಿಕೊಂಡರು.

---

ಸಣ್ ಸುದ್ದಿ

## ಹಿರಿಯ ಸಾಹಿತಿ, ವಿಮರ್ಶಕ ಎಂ.ಎಚ್.ಕೃಷ್ಣಯ್ಯ ನಿಧನ

ಬೆಂಗಳೂರು: ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಹಿರಿಯ ಸಾಹಿತಿ, ವಿಮರ್ಶಕ ಪ್ರೊ.ಎಂ.ಎಚ್.ಕೃಷ್ಣಯ್ಯ (85) ಅವರು ನಿಧನರಾಗಿದ್ದಾರೆ. ವಯೋಸಹಜ ಕಾಯಿಲೆಯಿಂದ ಬಳಲುತ್ತಿದ್ದ ಅವರು ಶುಕ್ರವಾರ ಮಧ್ಯಾಹ್ನ 1 ಗಂಟೆ ಸುಮಾರಿಗೆ ನಿಧನರಾಗಿದ್ದಾರೆ. ಅವರ ಪಾರ್ಥಿವ ಶರೀರದ ಅಂತಿಮ ಸಂಸ್ಕಾರ ಗಾಯತ್ರಿನಗರದ ಹರಿಶ್ಚಂದ್ರ ಘಾಟ್‌ನಲ್ಲಿ ಶನಿವಾರ ಬೆಳಗ್ಗೆ 11ಕ್ಕೆ ನಡೆಯಲಿದೆ ಎಂದು ಕುಟುಂಬದ ಮೂಲಗಳು ಮಾಹಿತಿ ನೀಡಿವೆ.

**ಕನ್ನಡ ಸೇವೆ:** 1937 ಜುಲೈ 21ರಂದು ಮೈಸೂರಿನಲ್ಲಿ ಜನಿಸಿದ್ದ ಎಂ.ಎಚ್.ಕೃಷ್ಣಯ್ಯ ಅವರು, ಪ್ರಾಧ್ಯಾಪಕರಾಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷ, ಎ.ಸಿ.ಸಂಘದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದರು. ಸಾಹಿತ್ಯ ಮತ್ತು ಕಲಾ ವಿಮರ್ಶೆ ಕ್ಷೇತ್ರದಲ್ಲಿ ಅತ್ಯುತ್ತ ಶಿಸ್ತಿನ ಕಾರ್ಯನಿರ್ವಹಣೆಗೆ ಕೃಷ್ಣಯ್ಯ ಹೆಸರಾಗಿದ್ದರು.

---

**ಎಂ.ಎಚ್. ಕೃಷ್ಣಯ್ಯನವರಿಗೆ ನುಡಿನಮನ:** ಚಾಲನೆ: ಎಂ. ನರಸಿಂಹ, ಅತಿಥಿಗಳು: ಎ.ಜೆ. ಸದಾಶಿವ, ಹಂ.ಪ. ನಾಗರಾಜಯ್ಯ, ಜಿ. ರಾಮಕೃಷ್ಣ, ಬೈರಮಂಗಲ ರಾಮೇಗೌಡ, ರಾಮೇಗೌಡ, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ, ಉದಯಭಾನು ಕಲಾಸಂಘ, ಸ್ಥಳ: ಉದಯಭಾನು ಸಾಂಸ್ಕೃತಿಕ ಭವನ, ರಾಮಕೃಷ್ಣಮಠ ಬಡಾವಣೆ, ಕೆಂಪೇಗೌಡನಗರ, ಬೆಳಿಗ್ಗೆ 10.30

---

## ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯ ನಿಧನ

ಬೆಂಗಳೂರು: ರಾಜ್ಯ ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಮತ್ತು ಬಿಎಂಶ್ರೀ ಪ್ರತಿಷ್ಠಾನ ಗೌರವಾಧ್ಯಕ್ಷ ನಾಡೋಜ ಪ್ರೊ.ಎಂ.ಎಚ್. ಕೃಷ್ಣಯ್ಯ ಅವರು ಉಸಿರಾಟ ಸಮಸ್ಯೆಯಿಂದ ಶುಕ್ರವಾರ ಸ್ವಗೃಹದಲ್ಲಿ ನಿಧನರಾದರು. ರಾಷ್ಟ್ರಕವಿ ಕುವೆಂಪು ರಚಿಸಿದ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಗಮಕ ರೂಪದಲ್ಲಿ ಕಾಣಲು ಪ್ರಮುಖರಾದ ಇವರು, ಪ್ರಸಿದ್ಧ ಸಾಹಿತ್ಯ ವಿಮರ್ಶಕರಾಗಿದ್ದರು. ಮೈಸೂರು ವಿವಿಯಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ ಪೂರೈಸಿದ್ದ ಕೃಷ್ಣಯ್ಯ, ಬೆಂಗಳೂರು, ಕೋಲಾರ, ಮಂಗಳೂರು ಮತ್ತು ಮಾಗಡಿ ಸೇರಿ ಹಲವು ಸರ್ಕಾರಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದರು. ಪ್ರಸಿದ್ಧ ವಿದ್ವಾಂಸರೂ, ಶಿಸ್ತಿನ ಪ್ರವಚನಕಾರರೂ ಆದ ಕೃಷ್ಣಯ್ಯ, 30ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಶೃಂಗಾರಲಹರಿ' ಕೃತಿಗೆ ಲಲಿತಕಲಾ ಅಕಾಡೆಮಿ ಪುರಸ್ಕಾರ, 'ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಸೇರಿ ಹಲವು ಪ್ರತಿಷ್ಠಿತ ಪ್ರಶಸ್ತಿಗಳು ಸಂದಿವೆ. ಶನಿವಾರ (ಆ.13) ಬೆಳಗ್ಗೆ 10.30ಕ್ಕೆ ಮಲ್ಲೇಶ್ವರದ ಹರಿಶ್ಚಂದ್ರ ಘಾಟ್‌ನಲ್ಲಿ ಅಂತ್ಯಕ್ರಿಯೆ ನಡೆಯಲಿದೆ.

---

## ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಪ್ರೊ. ಎಂ.ಎಚ್. ಕೃಷ್ಣಯ್ಯ ನಿಧನ

ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷರೂ ಆಗಿದ್ದ ವಿಮರ್ಶಕ ಪ್ರೊ. ಎಂ.ಎಚ್. ಕೃಷ್ಣಯ್ಯ (85) ಅವರು ಶುಕ್ರವಾರ ನಿಧನರಾದರು.

ಗಾಯತ್ರಿನಗರದ ಹರಿಶ್ಚಂದ್ರ ಘಾಟ್‌ನಲ್ಲಿ ಶನಿವಾರ (ಆಗಸ್ಟ್ 13) ಬೆಳಿಗ್ಗೆ 11 ಗಂಟೆಗೆ ಅಂತ್ಯಕ್ರಿಯೆ ನಡೆಸಲಾಗುವುದು ಎಂದು ಅವರ ಕುಟುಂಬದವರು ತಿಳಿಸಿದ್ದಾರೆ.

---

**ಉಪನ್ಯಾಸ:** ಬಿಎಂಶ್ರೀ ಪ್ರತಿಷ್ಠಾನ ಆಯೋಜನೆ. ಕನ್ನಡ ಸಾ... ...ಗೇರಿ ಕೃಷ್ಣಶರ್ಮ ಕೊಡುಗೆ ಕುರಿತು ಉಪನ್ಯಾಸ; ಸಾಹಿತಿ ಡಾ. ಪ್ರ... ...ಧವ್. ಅಧ್ಯಕ್ಷತೆ: ಡಾ. ಬೈರಮಂಗಲ ರಾಮೇಗೌಡ. ಸ್ಥಳ: ಎಂ.ವಿ.ಸೀ. ಸಭಾಂ... ...ಂಶ್ರೀ ಕಲಾಭವನ. ಎನ್.ಆರ್. ಕಾಲನಿ. ಸಂಜೆ 5ಕ್ಕೆ.

---

...ಎ. ಸುಬ್ಬಯ್ಯ ಹೆಗಡೆ ಶಾಸ್ತ್ರಿ, ಎಂ.ಕೆ. ವಿಜಯಲಕ್ಷ್ಮಿ ಎನ್. ಅನಂತರಂಗಾಚಾರ್, ಅನಂತರಂಗ ಪ್ರತಿಷ್ಠಾನ ದತ್ತಿ ಕಾರ್ಯಕ್ರಮ: ವಿಷಯ: ದಲಿತ, ಬಂಡಾಯ ಸಾಹಿತ್ಯ-ಹೊಸನೋಟ, ಉಪನ್ಯಾಸ: ಸುಬ್ರಹ್ಮಣ್ಯ ಸ್ವಾಮಿ, ಅಧ್ಯಕ್ಷತೆ: ಬೈರಮಂಗಲ ರಾಮೇಗೌಡ, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ, ಸ್ಥಳ: ಎಂ.ವಿ.ಸಿ., ಸಭಾಂಗಣ, ಬಿ.ಎಂ.ಶ್ರೀ., ಕಲಾಭವನ,

---

**ಬಿಎಂಶ್ರೀ ಪ್ರತಿಷ್ಠಾನ:** ಬಿ.ಎಸ್. ರುಕ್ಮಿಣಮ್ಮ, ಬಿ.ಎಸ್. ಸೀತಾರಾಮರಾವ್ ದತ್ತಿ ಕಾರ್ಯಕ್ರಮ. 'ಕನ್ನಡ ಸಾಹಿತ್ಯಕ್ಕೆ ಬೆಟಗೇರಿ ಕೃಷ್ಣಶರ್ಮ' ಅವರ ಕೊಡುಗೆ ಕುರಿತು ಸಾಹಿತಿ ಡಾ. ಪ್ರಮೀಳಾ ಮಾಧವ್ ಅವರಿಂದ ಉಪನ್ಯಾಸ. ಸ್ಥಳ: ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಕಲಾಭವನ, ಎನ್.ಆರ್. ಕಾಲೊನಿ. ಸಂಜೆ 5.

---

**ಬಿ.ಎಸ್. ರುಕ್ಮಿಣಮ್ಮ, ಬಿ.ಎಸ್. ಸೀತಾರಾಮರಾವ್ ದತ್ತಿ ಕಾರ್ಯಕ್ರಮ:** ವಿಷಯ: ಕನ್ನಡ ಸಾಹಿತ್ಯಕ್ಕೆ ಬೆಟಗೇರಿ ಕೃಷ್ಣಶರ್ಮಾ ಕೊಡುಗೆ, ಉಪನ್ಯಾಸ: ಪ್ರಮೀಳಾ ಮಾಧವ್, ಅಧ್ಯಕ್ಷತೆ: ಬೈರಮಂಗಲ ರಾಮೇಗೌಡ, ಸ್ಥಳ: ಬಿ.ಎಂ. ಶ್ರೀ ಕಲಾಭವನ, ಸಂಜೆ 5

## ಅಭಿನಂದನೆ

## ಸೌಹಾರ್ದ ಸಮ್ಮಾನ ಪುರಸ್ಕಾರಕ್ಕೆ ಲಕ್ಷ್ಮೀನಾರಾಯಣ ಆಯ್ಕೆ



ಉತ್ತರ ಪ್ರದೇಶದ ಹಿಂದಿ ಸಂಸ್ಥಾನ ನೀಡುವ ೨೦೨೧ನೇ ಸಾಲಿನ ಸೌಹಾರ್ದ ಸಮ್ಮಾನ ಪುರಸ್ಕಾರಕ್ಕೆ ಕನ್ನಡದ ಹಿರಿಯ ಲೇಖಕ ಹಾಗೂ ಬಿ.ಎಂ.ಶ್ರೀ. ಪ್ರತಿಷ್ಠಾನದ ನಿಕಟಪೂರ್ವ ಅಧ್ಯಕ್ಷರು ಡಾ.ಆರ್. ಲಕ್ಷ್ಮೀನಾರಾಯಣ ಆಯ್ಕೆಯಾಗಿದ್ದಾರೆ.

ಹಿಂದಿಯೇತರ ಪ್ರದೇಶದ ಲೇಖಕರು, ಹಿಂದಿ ಮತ್ತು ಆಯಾ ಪ್ರಾದೇಶಿಕ ಭಾಷೆಗಳ ನಡುವೆ ಸೌಹಾರ್ದ ಸಂವರ್ಧನೆಗಾಗಿ ಅನುವಾದದ ಮೂಲಕ ನೀಡಿರುವ ಕೊಡುಗೆಗಾಗಿ ಈ ಪುರಸ್ಕಾರ ನೀಡಲಾಗುತ್ತದೆ ಹಾಗೂ ಇದರಲ್ಲಿ ರೂ.೨.೫ ಲಕ್ಷ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ.

ಡಾ. ಆರ್. ಲಕ್ಷ್ಮೀನಾರಾಯಣ ಅವರು (ಜನನ: ೨-೧೨-೧೯೪೦) ತುಮಕೂರಿನವರು. ೧೯೭೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಮುಗಿಸಿದ ಮೇಲೆ ೧೯೭೧ ರಿಂದ ೨೦೦೬ರ ವರೆಗೆ ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ, ೨೦೦೬ ಮೇ ತಿಂಗಳಿಂದ ೨೦೦೭ರ ಡಿಸೆಂಬರ್ ವರೆಗೆ ಧಾರವಾಡದಲ್ಲಿ ಇಲಾಖೆಯ ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿ ೨೦೦೭ರಲ್ಲಿ ನಿವೃತ್ತರಾದರು. ೨೦೦೪ರಲ್ಲಿ 'ವಕ್ರೋಕ್ತಿ ಜೀವಿತ- ಒಂದು ಅಧ್ಯಯನ' ಎಂಬ ಮಹಾ ಪ್ರಬಂಧಕ್ಕೆ ಬೆಂಗಳೂರು ವಿಶ್ವ ವಿದ್ಯಾಲಯದ ಪಿಎಚ್.ಡಿ. ಪದವಿ. ಇಂಗ್ಲಿಷ್ ಮತ್ತು ಹಿಂದಿಯಿಂದ ಅನುವಾದ ಮಾಡುವುದರಲ್ಲಿ ನಿರತರು.

ಪ್ರಕಟಿತ ಸ್ವತಂತ್ರ ಕೃತಿಗಳು: ೮, ಅನುವಾದಿತ ಕೃತಿಗಳು: ೧೩, ಸಂಪಾದಿತ ಕೃತಿಗಳು: ೩

ಪ್ರಶಸ್ತಿಗಳು : ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಆಹ್ಲಾದ ಕೃತಿಗೆ ಗೊರೂರು ಸಾಹಿತ್ಯ ಪ್ರಶಸ್ತಿ, ಕುವೆಂಪು ಭಾಷಾ ಭಾರತಿ ಜೀವಮಾನದ ಸಾಧನೆಗಾಗಿ ನೀಡುವ ವಿಶೇಷ ಪುರಸ್ಕಾರ, ಮೈಕೋ ಕನ್ನಡ ಬಳಗದ ಕಿಟ್ಟೆಲ್ ಪುರಸ್ಕಾರ, 'ಎಸ್.ವಿ.ಪಿ. ಸಂಸ್ಮರಣ ಪ್ರಶಸ್ತಿ', ರಾಜ್ಯ ಸರ್ಕಾರದಿಂದ ಉತ್ತಮ ಕಾಲೇಜು ಶಿಕ್ಷಕ ಪ್ರಶಸ್ತಿ.

## ಕರ್ನಾಟಕ ಲೋಚನ

ನಮ್ಮ ಷಾಣ್ಮಾಸಿಕ ವಿದ್ವತ್ ಪತ್ರಿಕೆ- **ಕರ್ನಾಟಕ ಲೋಚನ** ತಮ್ಮೆಲ್ಲರ ಸಹಕಾರದಿಂದ, ಸಂಶೋಧನಾತ್ಮಕ ಲೇಖನಗಳನ್ನು ಒಳಗೊಂಡು ಸುಂದರವಾಗಿ ಮೂಡಿಬರುತ್ತಿದೆ. ಈ ಪತ್ರಿಕೆಯ ಆಜೀವ ಚಂದಾದಾರರಾಗಲು ರೂ. ೧೫೦೦/-ಮಾತ್ರ. ತಾವೆಲ್ಲರೂ ಈ ಪತ್ರಿಕೆಗೆ ಚಂದಾದಾರರಾಗಲು ವಿನಂತಿ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023 dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-09-2022**

## ಹಸ್ತಪ್ರತಿ ವಿಭಾಗದ ವರದಿ



ಬೆಂಗಳೂರಿನ Christ Deemed university ಭಾಷಾ ವಿಭಾಗವು, ಸೆಪ್ಟಂಬರ್ ೮, ೨೦೨೨ರಂದು World Literay Day ಸಮಾರಂಭವನ್ನು ತಮ್ಮ ಕ್ಯಾಂಪಸ್‌ನಲ್ಲಿ ವಿಜೃಂಭಣೆಯಿಂದ ಆಯೋಜಿಸಿತ್ತು. ಈ ಸಂದರ್ಭದಲ್ಲಿ ತಾಳೆಗರಿಗಳ, ತಾಮ್ರಪಟಗಳ, ಕಡತ ಕಾಗದದ ಹಸ್ತಪ್ರತಿಗಳ ಪ್ರದರ್ಶನವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನವು ಆಯೋಜಿಸಿತ್ತು. ಬ್ರಾಹ್ಮಿ ಲಿಪಿಯಿಂದ ಪ್ರಾರಂಭಗೊಂಡು, ದಕ್ಷಿಣಾತ್ಯ ಲಿಪಿಗಳ ಉಗಮ, ವಿಕಾಸ, ಬೆಳವಣಿಗೆಗಳನ್ನು ಬಿಂಬಿಸುವ ಪಟಗಳನ್ನು(Charts) ಪ್ರದರ್ಶನದಲ್ಲಿ ಪ್ರದರ್ಶಿಸಲಾಗಿತ್ತು. ಡಿಜಿಟಲೀಕರಣಗೊಂಡ ತಾಳೆಗರಿಗಳನ್ನು Lap-top ಮೂಲಕ ಪ್ರದರ್ಶಿಸಲಾಗಿತ್ತು. ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಶಿವಪ್ರಸಾದ್ ಅವರು ಪ್ರದರ್ಶನವನ್ನು ಆಯೋಜಿಸಿದ್ದರು. ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್.ಗುರುಪ್ರಸಾದ್ ಮತ್ತು ಹಸ್ತಪ್ರತಿ ಶಾಸ್ತ್ರದಲ್ಲಿ ತರಬೇತಿ ಪಡೆಯುತ್ತಿರುವ ಶ್ರೀ ಉಮೇಶ ಶಿರೂರ್ ಇವರಿಬ್ಬರೂ ಪ್ರದರ್ಶನವನ್ನು ಅಚ್ಚುಕಟ್ಟಾಗಿ ಆಯೋಜಿಸಿದ್ದರು.

ಕಳೆದ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ಉಡುಪಿಯ ಶಿರೂರು ಗ್ರಾಮದಿಂದ ದಿ|| ಫಣಿಯಪ್ಪಯ್ಯ ಶಿರೂರು ಅವರ ಮನೆಯಲ್ಲಿದ್ದ ಯಕ್ಷಗಾನದ ೧೮ ತಾಳೆಗರಿ ಗ್ರಂಥಗಳು ಪ್ರತಿಷ್ಠಾನದಲ್ಲಿ ಸಂರಕ್ಷಣೆಗೊಂಡು, ಡಿಜಿಟಲೀಕರಣಗೊಂಡ ನಂತರ ಅವುಗಳನ್ನು ಅವರ ಆಶಯದಂತೆ ಅವರಿಗೇ ಹಿಂದಿರುಗಿಸಲಾಗಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ............................................................................

..........................................................................................

..........................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೯೭೨೮೧೨೧೨೬